# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **1394**

ವಿಧಾನ ಪರಿಷತ್ತು ಸದಸ್ಯರ ಹೆಸರು : ಶ್ರೀ ಆರ್. ಧರ್ಮಸೇನ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 16.03.2021

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಯಲ್ಲಿ ಇದುವರೆಗೂ ಎಷ್ಟು ಬಿ.ಪಿ.ಎಲ್ ಕಾರ್ಡ್ ಗಳನ್ನು ಹಂಚಲಾಗಿದೆ; ಇನ್ನೂ ಎಷ್ಟು ಜನರಿಗೆ ಹಂಚಬೇಕಾಗಿದೆ; | ಮೈಸೂರು ಮತ್ತು ಚಾಮನಗರ ಜಿಲ್ಲೆಗಳಲ್ಲಿ ಹಂಚಿಕೆ ಮಾಡಿರುವ ಪಡಿತರ ಚೀಟಿಗಳ ವಿವರ ಈ ಕೆಳಕಂಡಂತಿದೆ: (table below) |

| ಕ್ರ.ಸಂ | ಜಿಲ್ಲೆ | ಅಂತ್ಯೋದಯ ಅನ್ನ ಪಡಿತರ ಚೀಟಿ | ಆದ್ಯತಾ ಪಡಿತರ ಚೀಟಿ |
|---|---|---|---|
| 1. | ಮೈಸೂರು | 50227 | 660653 |
| 2. | ಚಾಮರಾಜನಗರ | 35770 | 255974 |

ಮೈಸೂರು ಜಿಲ್ಲೆ 2018-19 ರಿಂದ 2020-21 ನೇ ಸಾಲಿನವರೆಗೆ ಆದ್ಯತಾ ಪಡಿತರ ಚೀಟಿ ಕೋರಿ 42,758 ಅರ್ಜಿಗಳು ಸ್ವೀಕೃತವಾಗಿದ್ದು, 23,754 ಪಡಿತರ ಚೀಟಿಗಳನ್ನು ವಿತರಿಸಲಾಗಿದೆ. 12,214 ಅರ್ಜಿಗಳು ತಿರಸ್ಕೃತಗೊಂಡಿದ್ದು, 6,790 ಅರ್ಜಿಗಳು ಪರಿಶೀಲನೆಗೆ ಬಾಕಿ ಇರುತ್ತವೆ. ಚಾಮರಾಜನಗರ ಜಿಲ್ಲೆಯಲ್ಲಿ 2018-19 ರಿಂದ 2020-21ನೇ ಸಾಲಿನವರೆಗೆ 17,786 ಅರ್ಜಿಗಳು ಸ್ವೀಕೃತವಾಗಿದ್ದು, 12795 ಪಡಿತರ ಚೀಟಿಗಳನ್ನು ವಿತರಿಸಲಾಗಿದೆ. 2797 ಅರ್ಜಿಗಳು ತಿರಸ್ಕೃತಗೊಂಡಿದ್ದು, 2194 ಅರ್ಜಿಗಳ ಪರಿಶೀಲನೆ ಬಾಕಿ ಇರುತ್ತವೆ.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಆ | ಅನರ್ಹರಿಗೆ ಕೊಟ್ಟಿರುವ ಎಷ್ಟು ಕಾರ್ಡ್ ಗಳನ್ನು ವಾಪಸ್ ಪಡೆಯಲಾಗಿದೆ; ಅರ್ಹರಲ್ಲದಿದ್ದರೂ ಪರಿಶೀಲಿಸದೆ | ಸರ್ಕಾರವು ಅನರ್ಹ ಬಿಪಿಎಲ್ ಪಡಿತರ ಚೀಟಿಗಳನ್ನು ನಿರಂತರವಾಗಿ ಪತ್ತೆ ಹಚ್ಚಿ ಅಂತಹ ಪಡಿತರ ಚೀಟಿಗಳನ್ನು ರದ್ದುಪಡಿಸಲಾಗುತ್ತಿದೆ. ರಾಜ್ಯದಲ್ಲಿ ಕಳೆದ ಮೂರು ವರ್ಷಗಳಿಂದ |

| | | |
|---|---|---|
| | ಹಂಚಿಕೆ ಮಾಡಿರುವ ಅಧಿಕಾರಿಗಳ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ; | ಇದುವರೆಗೂ 2,28,188 ಆದ್ಯತಾ (ಬಿ.ಪಿ.ಎಲ್) ಅನರ್ಹ ಪಡಿತರ ಚೀಟಿಗಳನ್ನು ಪತ್ತೆ ಹಚ್ಚಿ ರದ್ದುಪಡಿಸಲಾಗಿದೆ ಹಾಗೂ ರೂ.3,07,36,170/- ದಂಡವನ್ನು ವಸೂಲಿ ಮಾಡಲಾಗಿದೆ. |
| ಇ | ಬಿ.ಪಿ.ಎಲ್ ಕಾರ್ಡ್ ಹಂಚಲು ಹೊಸ ಮಾನದಂಡಗಳನ್ನು ನಿಗಧಿಪಡಿಸಲು ಸರ್ಕಾರ ಚಿಂತಿಸಿದೆಯೇ; ಚಿಂತಿಸಿದ್ದಲ್ಲಿ ಮಾಹಿತಿ ನೀಡುವುದು? | ಸರ್ಕಾರಿ ಆದೇಶ ಸಂ:ಆನಾಸ 116 ಡಿಆರ್‌ಎ 2015, ಬೆಂಗಳೂರು, ದಿನಾಂಕ:25.03.2017 ಮತ್ತು ಸರ್ಕಾರಿ ಆದೇಶ ಸಂ:ಆನಾಸ 116 ಡಿಆರ್‌ಎ 2015, ಬೆಂಗಳೂರು, ದಿನಾಂಕ:20.05.2017 ರಂತೆ ನಾಲ್ಕು ಹೊರಗಿಡುವಿಕೆ ಮಾನದಂಡಗಳನ್ನು ನಿಗದಿಪಡಿಸಲಾಗಿದೆ. ಸದರಿ ಮಾನದಂಡಗಳು ಚಾಲ್ತಿಯಲ್ಲಿರುತ್ತವೆ. |

**ಆನಾಸ 105 ಡಿಆರ್‌ಎ 2021 (ಇ-ಆಫೀಸ್)**

(ಉಮೇಶ ವಿ. ಕತ್ತಿ)
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.